CPMG / KA / BG-GPO/13 / 2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೩೮ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೪, ೨೦೦೩ (ಭಾದ್ರಪದ ೧೩, ಶಕ ವರ್ಷ ೧೯೨೫) | ಸಂಚಿಕೆ ೩೬ |
|---|---|---|



## ಭಾಗ-೪-ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ವಸತಿ ಸಚಿವಾಲಯ**

**ಅಧಿಸೂಚನೆ**

**ನಂ: ವಇ 115 ಕೊಮಂಇ 2001 ಬೆಂಗಳೂರು, ದಿನಾಂಕ: 18ನೇ ಜುಲೈ 2003**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಬಳ್ಳಾರಿ ಜಿಲ್ಲೆಯ ಹೊಸಪೇಟೆ ನಗರದ ಥಿಯೋಸಾಫಿಕಲ್ ಲಾಡ್ಜ್ ಉತ್ತರ ಭಾಗದ ಕೊಳಚೆ ಪ್ರದೇಶವನ್ನು ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಬಳ್ಳಾರಿ ರವರು ತಮ್ಮ ಅಧಿಸೂಚನೆ ಸಂಖ್ಯೆ: ಡಿಇವಿ/ಎಂಯುಎಸ್/ಎಸ್‌ಎಲ್‌ಎಂ.3 86-87 ದಿನಾಂಕ: 23/30.11.1986 ರಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಅಧಿನಿಯಮ 1973 ಕಲಂ 3(1) ರನ್ವಯ ಘೋಷಿಸಿರುತ್ತಾರೆ.

ಸದರಿ ಪ್ರದೇಶವನ್ನು ಅಭಿವೃದ್ಧಿಗೊಳಿಸಿ ಅಲ್ಲಿ ವಾಸಿಸುವ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಉದ್ದೇಶಿಸಿದೆ. ಹಾಗೂ ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಅಧಿನಿಯಮ ಕಲಂ 17 ರಂತೆ ಭೂಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವೆಂದು ಮನಗಂಡು ಸರ್ಕಾರದ ಅಧಿಸೂಚನೆ ಸಂಖ್ಯೆ: ವಇ 115 ಕೊಮಂಇ 2001 ದಿನಾಂಕ: 7.2.2002 ರಲ್ಲಿ ಪ್ರಾರಂಭಿಕವಾಗಿ ಘೋಷಿಸಿ ಸಂಬಂಧಿಸಿದವರಿಂದ/ ಸಾರ್ವಜನಿಕರಿಂದ/ ಆಸಕ್ತಿಯುಳ್ಳವರಿಂದ ಆಕ್ಷೇಪಣೆ/ಸಲಹೆ ಹಾಗೂ ಮನವಿಗಳಿದ್ದಲ್ಲಿ 15 ದಿನಗಳಲ್ಲಿ ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿತ್ತು. ಸರ್ವೆ ನಂ. 104/1 ಎ ಗೆ ಸಂಬಂಧಿಸಿದ ಭೂಮಾಲೀಕರಾದ ಥಿಯೋಸಾಫಿಕಲ್ ಲಾಡ್ಜ್ ಹೊಸಪೇಟೆ (ದಿವ್ಯಜ್ಞಾನ ಸಮಾಜ ಮಂದಿರ ಹೊಸಪೇಟೆ)ರವರಿಗೆ ಅಧಿಸೂಚನೆಯನ್ನು ಜಾರಿಗೊಳಿಸಿದ್ದರು. ಈ ಬಗ್ಗೆ ಯಾರು ಆಕ್ಷೇಪಣೆ ಸಲ್ಲಿಸಿದರಿಂದ ಪ್ರಸ್ತಾಪಿತ ಪ್ರದೇಶವನ್ನು ಮಂಡಳಿಯ ಪರವಾಗಿ ಸ್ವಾಧೀನಪಡಿಸಲು ತೀರ್ಮಾನಿಸಲಾಗಿದೆ.

ಸದರಿ ಪ್ರದೇಶವು ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಅಗತ್ಯವಿರುವುದರಿಂದ ನಿಯಮಾನುಸಾರ ಪರಿಹಾರವನ್ನು ಭೂಸ್ವಾಧೀನಾಧಿಕಾರಿ ನಿಗದಿಪಡಿಸುವರೆಂದು ಸೂಚಿಸಲಾಗಿದೆ.

ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸಲು ಹಾಗೂ ಆ ಪ್ರದೇಶದಲ್ಲಿ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಮನಗಂಡಿರುವುದರಿಂದ ಷೆಡ್ಯೂಲ್‌ನಲ್ಲಿ ತಿಳಿಸಿರುವ ಕೊಳಚೆ ಪ್ರದೇಶಗಳನ್ನು ಭೂಸ್ವಾಧೀನಪಡಿಸಿಕೊಳ್ಳಲು ತೀರ್ಮಾನಿಸಿ ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 17 ರನ್ವಯ ಷೆಡ್ಯೂಲ್ ನಲ್ಲಿ ತಿಳಿಸಿರುವ ಜಮೀನನ್ನು ಅಂತಿಮವಾಗಿ ಭೂಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಘೋಷಿಸಲಾಗಿದೆ.

**ಷೆಡ್ಯೂಲ್**

| ಕೊಳಚೆ ಪ್ರದೇಶದ ಹೆಸರು ಮತ್ತು ಇರುವ ಸ್ಥಳ | ಭೂ ಮಾಲೀಕರ ಹೆಸರು | ಸರ್ವೆನಂ. | ವಿಸ್ತೀರ್ಣ ಎ-ಗುಂ | ಚಕ್ಕುಬಂದಿ |
|---|---|---|---|---|
| ಹೊಸಪೇಟೆ ನಗರದ ಥಿಯೋಸಾಫಿಕಲ್ ಲಾಡ್ಜ್ ಉತ್ತರ ಭಾಗದ | ಥಿಯೋಸಾಫಿಕಲ್ ಲಾಡ್ಜ್ ಹೊಸಪೇಟೆ (ದಿವ್ಯಜ್ಞಾನ ಸಮಾಜ ಮಂದಿರ ಹೊಸಪೇಟೆ) | 104/ 1ಎ | 1-07 | **ಪೂರ್ವ-** ರಸ್ತೆ<br>**ಪಶ್ಚಿಮ-** ಸ.ನಂ. 89 (ಸಿಟಿ ಸಾಮಿಲ್) ಕಟ್ಟಿಗೆ ಕೊರೆಯುವ ಯಂತ್ರದ ಕಾರ್ಖಾನೆ<br>**ಉತ್ತರ-** 105ಎ<br>**ದಕ್ಷಿಣ-** 104ರ ಉಳಿದ ಭಾಗ ಅಂದರೆ 104/1ಬಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಂಜುಂಡಪ್ಪ**

ಪಿ. ಆರ್. 884 ಪೀಠಾಧಿಕಾರಿ-4, ವಸತಿ ಇಲಾಖೆ.

**ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಮಮಇ/ 20 ಮಅನಿ/ 2003 ಬೆಂಗಳೂರು, ದಿನಾಂಕ 26/28ನೇ ಜುಲೈ 2003**

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಮೆಮೋರಾಂಡಮ್ ಮತ್ತು ಆರ್ಟಿಕಲ್ಸ್ ಆಫ್ ಅಸೋಷಿಯೇಷನ್‌ನ ಅನುಚ್ಛೇದ 19(I)ರ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಬಳಸಿ ರಾಜ್ಯ ಸರ್ಕಾರವು ಕೆಳಕಾಣಿಸಿದ ಅಧಿಕಾರಿಯವರನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಇದರ ನಿರ್ದೇಶಕ ಮಂಡಳಿಗೆ ಅವರ ಹೆಸರಿನ ಮುಂದೆ ತೋರಿಸಲಾಗಿರುವ ಸ್ಥಾನದಲ್ಲಿ ನಿರ್ದೇಶಕ ಸ್ಥಾನಕ್ಕೆ ನಾಮ ನಿರ್ದೇಶನ ಮಾಡಲಾಗಿದೆ.

| ನಾಮ ನಿರ್ದೇಶಕರಾದವರ ಹೆಸರು | ಯಾರ ಬದಲಿಗೆ ನಾಮ ನಿರ್ದೇಶನ ಮಾಡಿದೆ ವಿವರ |
|---|---|
| ಶ್ರೀ ರಿತ್ವಿಕ್ ರಂಜನಂ ಪಾಂಡೆ, ಭಾ.ಆ.ಸೇ ಉಪ ಕಾರ್ಯದರ್ಶಿ-III ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ | ಶ್ರೀ ಅಮಲನ್ ಆದಿತ್ಯ ಬಿಸ್ವಾಸ, ಭಾ.ಆ.ಸೇ. ಹಿಂದಿನ ಸರ್ಕಾರದ ಉಪಕಾರ್ಯದರ್ಶಿ-III ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ. ದ. ಸಿದ್ಧಾಂತಿ**

ಪಿ. ಆರ್. 885 ಸರ್ಕಾರದ ಅಧೀನ ಕಾರ್ಯದರ್ಶಿ 1, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಮಮಅ 32 ರಾಮಅ 2002 ಬೆಂಗಳೂರು, ದಿನಾಂಕ 8ನೇ ಆಗಸ್ಟ್ 2003**

ಬಾಲಭವನ ಸೊಸೈಟಿ, ಬೆಂಗಳೂರು ಇದರ ನಿಯಮಾವಳಿ ಮತ್ತು ನಿಬಂಧನೆ ನಿಯಮ (II)ರ ಪ್ರಕಾರ, ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಬಾಲಭವನ ಸೊಸೈಟಿ, ಬೆಂಗಳೂರು ಇದರ ಆಡಳಿತ ಮಂಡಳಿಗೆ ಈ ಕೆಳಗೆ ಸೂಚಿಸಿರುವ ಅಧಿಕಾರೇತರ ಸದಸ್ಯರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| **ಹೆಸರು ಮತ್ತು ವಿಳಾಸ** | **ಪದನಾಮ** |
|---|---|
| ಶ್ರೀಮತಿ ಹೆಚ್. ಇಂದ್ರಾಣಿ<br>ತಂದೆ ಲೇಟ್ ಹಟ್ಟಯ್ಯ, ಮಳವಳ್ಳಿ, ತಾ: ಮಂಡ್ಯ ಜಿಲ್ಲೆ. | ಸದಸ್ಯರು |

ಬಾಲಭವನ ಸೊಸೈಟಿ ಆಡಳಿತ ಮಂಡಳಿಯ ಅಧಿಕಾರೇತರ ಸದಸ್ಯರು ನಿಯಮಾನುಸಾರ ಪ್ರವಾಸ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ. ದ. ಸಿದ್ಧಾಂತಿ**

ಪಿ. ಆರ್. 886 ಸರ್ಕಾರದ ಅಧೀನ ಕಾರ್ಯದರ್ಶಿ 1, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 67 ರಾಲೆಪ 2003 ಬೆಂಗಳೂರು, ದಿನಾಂಕ 13ನೇ ಆಗಸ್ಟ್ 2003**

ನೇಮಕಾತಿ ನಿರೀಕ್ಷಣೆಯಲ್ಲಿರುವ ಡಾ: ಜಿ. ವಿ. ನಂದನಕುಮಾರ್, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರ ಸೇವೆಯನ್ನು ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು ಇಲ್ಲಿನ ಲೆಕ್ಕಾಧಿಕಾರಿ ಹುದ್ದೆಗೆ ನಿಯೋಜನೆ ಮೇಲೆ ನೇಮಿಸುವ ಸಲುವಾಗಿ, ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಪ್ರಭಾಕರ್**

ಪಿ. ಆರ್. 887 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ, (ಆಡಳಿತ).

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 154 ಸಸಕಾ 2003 ಬೆಂಗಳೂರು, ದಿನಾಂಕ 16ನೇ ಆಗಸ್ಟ್ 2003**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 29(1)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಇದೇ ಸಮಸಂಖ್ಯೆಯ ಅಧಿಸೂಚನೆ ದಿನಾಂಕ 23.7.2003ರಲ್ಲಿ ಶ್ರೀ ಭಾಗ್ಯಲಕ್ಷ್ಮೀ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಖಾನಾಪುರ, ಬೆಳಗಾಂ ಜಿಲ್ಲೆ, ಇದರ ಆಡಳಿತ ಮಂಡಳಿಗೆ ನಾಮನಿರ್ದೇಶನ ಮಾಡಿರುವ ಶ್ರೀ ಚಂದ್ರಶೇಖರ ಗಂಗಪ್ಪ ಅಂಗಡಿ, ಮುಕಾಂ ಪೋಸ್ಟ್, ಬೆಂಡಿಗೇರಿ, ಬೆಳಗಾಂ ತಾಲ್ಲೂಕು ಇವರ ನಾಮನಿರ್ದೇಶನವನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಸದರಿ ಸ್ಥಾನದಲ್ಲಿ ದಿನಾಂಕ 23.7.2003ರ ಅಧಿಸೂಚನೆಯಲ್ಲಿ ಕಲಂ 53ಎ ಅಡಿಯಲ್ಲಿ ನಾಮನಿರ್ದೇಶನ ಮಾಡಲಾಗಿದ್ದ ಶ್ರೀ ಚಂದ್ರಶೇಖರ ಬಸಪ್ಪ ಅಂಬೋಜಿ, ಕಕ್ಕೇರಿ, ಖಾನಾಪುರ ತಾಲ್ಲೂಕು ಇವರನ್ನು ಕಲಂ 29(1)ರಡಿಯಲ್ಲಿ ನಾಮನಿರ್ದೇಶನವನ್ನು ಮುಂದುವರೆಸಲಾಗಿದೆ.

ಮೇಲ್ಕಂಡ ಕಾರ್ಖಾನೆಯ ಆಡಳಿತ ಮಂಡಳಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 18 ಸಸಕಾ 2001, ದಿನಾಂಕ 30.8.2001ರಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 29(1) ಅಡಿಯಲ್ಲಿ ನಾಮನಿರ್ದೇಶನ ಮಾಡಿರುವ ಶ್ರೀ ಜಿತೇಂದ್ರ ಟೋಪಣ್ಣ ಮಾದರ, ರಾಯಾಪುರಗಳಲ್ಲಿ, ನಂದಗಡ ತಾಲ್ಲೂಕು, ಖಾನಾಪುರ, ಬೆಳಗಾಂ ಜಿಲ್ಲೆ, ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ. ಸದರಿಯವರ ಸ್ಥಾನದಲ್ಲಿ ಶ್ರೀ ಕೃಷ್ಣಾ ಅಂಬಾಜಿ ಖಾನಾಪುರೆ, ಸಾ: ಹಲಕರ್ಣಿ ತಾಲ್ಲೂಕು, ಖಾನಾಪುರ, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎಸ್. ಜಾಪಾಲಿ**

ಪಿ. ಆರ್. 888 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಾಪ್ರಯು 31 ಕೆಟಿಬಿ 2003 ಬೆಂಗಳೂರು, ದಿನಾಂಕ 13ನೇ ಆಗಸ್ಟ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಪ್ರಯು 25 ಕೆಟಿಬಿ 2002, ದಿನಾಂಕ: 08.10.2002 ರಲ್ಲಿ ಶ್ರೀ ಎ. ಬಿ. ಜವರಪ್ಪ, ಮಾಜಿ ಅಧ್ಯಕ್ಷರು, ಬಿ.ಸಿ.ಸಿ. ಅಕ್ಕಿ ಹೆಬ್ಬಾಳ್, ಕೆ.ಆರ್.ಪೇಟೆ, ಮಂಡ್ಯ ಜಿಲ್ಲೆ, ಇವರನ್ನು ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯ ಸದಸ್ಯರನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿದೆ.

ಮಾನ್ಯ ಸದಸ್ಯರಾದ ಶ್ರೀ ಎ. ಬಿ. ಜವರಪ್ಪರವರು ತಮ್ಮ ದಿನಾಂಕ 25.06.2003ರ ಪತ್ರದಲ್ಲಿ ವೈಯಕ್ತಿಕ ಕಾರಣಗಳಿಂದ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯ ಸದಸ್ಯತ್ವಕ್ಕೆ ಸಲ್ಲಿಸಿರುವ ರಾಜಿನಾಮೆಯನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸೀತಮ್ಮ**

ಪಿ. ಆರ್. 889 ಸರ್ಕಾರದ ಅಧೀನ ಕಾರ್ಯದರ್ಶಿ,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**HOME AND TRANSPORT SECRETARIAT**

**NOTIFICATION**

**No. HD: 142 PCR 2003 BANGALORE, DATED: 7th AUGUST 2003**

In pursuance of the Provisions contained in Section 6 of the Delhi Special Police Establishment Act, 1946 (Act xxv of 1946) read with Section 21 of the General Clauses Act, 1897 (Central Act x of 1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of offences punishable under Section 120-B read with 420, 467, 468, 471 IPC and Under Section 13(2) read with 13 (1) (d) of Prevention of Corruption Act, 1988 against Sri, Kasilingam, Custom House, Chennai, and Shri Naseer Ahamed, Proprietor, M/s. Ascent Exports, Cochin, Kerala, for their fraudulent acts and any other public servants or persons in relation to or in connection with the said offences and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

**P. KRISHNA MURTHY**

PR-890 Under Secretary to Government,

Home and Transport Department. (Crimes).

**NOTIFICATION**

**No. HD: 154 PCR 2003 BANGALORE, DATED: 7th AUGUST 2003**

In pursuance of the Provisions contained in Section 6 of the Delhi Special Police Establishment Act, 1946 (Act xxv of 1946) read with Section 21 of the General Clauses Act, 1897 (Central Act X of

1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of offences punishable under Section 120-B read with 420, 471, IPC and Under Section 13(2) read with 13 (1) (d) of Prevention of Corruption Act, 1988 against Sri. K. Murali Krishana, Divisional Manager, New India Assurence Company Ltd., Divisional Office, Ist Floor, Arya Ediga Hostel Complex, Double Road, Bellary-583101, Dr. Koteshwar Rao, the then Admin, Officer, Divisional Office, Bellary, at present Asst. Manager, NIAC, for their fraudulent acts and any other public servants or persons in relation to or in connection with the said offences and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

**P. KRISHNA MURTHY**

PR-891 Under Secretary to Government,

Home and Transport Department. (Crimes).

**NOTIFICATION**

**No. HD: 155 PCR 2003 BANGALORE, DATED: 7th AUGUST 2003**

In pursuance of the Provisions contained in Section 6 of the Delhi Special Police Establishment Act, 1946 (Act xxv of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of offences punishable under Section 120-B read with 420, 467, 468,471, IPC and Under Section 13(2) read with 13 (1) (d) of Prevention of Corruption Act, 1988 against Shri S. N. Shankar Sr. Manager, Indian Bank, Sadhashiva Nagar Branch, Bangalore, (Under Suspensions) for his fraudulent acts and any other public servants or persons in relation to or in connection with the said offences and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

**P. KRISHNA MURTHY**

PR-892 Under Secretary to Government,

Home and Transport Department. (Crimes).

**NOTIFICATION**

**No. HD: 160 PCR 2003 BANGALORE, DATED: 7th AUGUST 2003**

In pursuance of the Provisions contained in Section 6 of the Delhi Special Police Establishment Act, 1946 (Act xxv of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of offences punishable under Section 120-B read with 420, IPC and Under Section 13(2) read with 13 (1) (d) of Prevention of Corruption Act, 1988 against Shri P. K. Nandyalkar, Branch Manager, State Bank of India, Gangavathi Branch, Koppal Dist, Shri. C. N. Gunjali, Assistant Manager (Advances), State Bank of India, Gangavathi Branch, Koppal Dist. for their fraudulent acts and any other public servants or persons in relation to or in connection with the said offences and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

**P. KRISHNA MURTHY**

PR-893 Under Secretary to Government,

Home and Transport Department. (Crimes).

**NOTIFICATION**

**No. HD: 161 PCR 2003 BANGALORE, DATED: 7th AUGUST 2003**

In pursuance of the Provisions contained in Section 6 of the Delhi Special Police Establishment Act, 1946 (Act xxv of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the members of the Delhi Special Police Establishment for registration of the case and investigation of offences punishable under Section 120-B read with 420, IPC and Under Section 13(2) read with 13 (1) (d) of Prevention of Corruption Act, 1988 against Smt. N. Padmini, Chief Manager, Canara Bank, Chamarajpet Branch, Bangalore (Under suspension), Shri. H. N. Palegar, Senior Manager, Canara Bank, Chamarajpet Branch, Bangalore Shri Manjunatha B Shet, Officer, Canara Bank, Chamarajpet Branch, Bangalore for their fraudulent acts and any other public servants or persons in relation to or in connection with the said offences and any other offences committed in the course of the transaction arising out of the same fact in regard to this case within the whole State of Karnataka.

By Order and in the name of the Governor of Karnataka,

**P. KRISHNA MURTHY**

PR-894 Under Secretary to Government,

Home and Transport Department. (Crimes).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 57 ಸೇಅವಿ 98 ಬೆಂಗಳೂರು, ದಿನಾಂಕ 11ನೇ ಆಗಸ್ಟ್ 2003**

ಮೈಸೂರು ಅರಮನೆ (ಅರ್ಜನೆ ಮತ್ತು ವರ್ಗಾವಣೆ) ಅಧಿನಿಯಮ 1998 (1998ರ ಕರ್ನಾಟಕ ಅಧಿನಿಯಮ ಸಂಖ್ಯೆ: 32) ನೇದರ ಪ್ರಕರಣ 24ರ ಐಟಂ (8)ರ ಅಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮೈಸೂರು ಅರಮನೆಯ ಟ್ರಸ್ಟಿ ಮಂಡಳಿಗೆ ಈ ಅಧಿಸೂಚನೆಯ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಈ ಮುಂದೆ ತಿಳಿಸಿರುವವರನ್ನು ಸದಸ್ಯರನ್ನಾಗಿ ನೇಮಿಸುತ್ತದೆ.

**ಶ್ರೀಯುತ:**

1) ಪ್ರೊ. ಬಿ. ಶೇಖ್ ಆಲಿ
ನಂ. 59, 3ನೇ ಕ್ರಾಸ್,
7ನೇ ಮೈನ್,
ಸರಸ್ವತಿಪುರಂ,
ಮೈಸೂರು- 570009.

2) ಡಾ: ಎಂ. ಆರ್. ಶ್ರೀನಿವಾಸನ್,
ಮಾಜಿ ಅಧ್ಯಕ್ಷರು, ಅಣು ಶಕ್ತಿ ಆಯೋಗ,
ನಂ. 612, 11ನೇ ಕ್ರಾಸು,
2ನೇ ಮೈನ್,
3ನೇ ಹಂತ, ಜೆ. ಪಿ. ನಗರ, ಬೆಂಗಳೂರು-560078

3) ಶ್ರೀ ಮೈಸೂರು ಸುಬ್ರಮಣ್ಯ,
ನಂ. 4, ಯಲ್ಲಪ್ಪನ ತೋಟ,
10ನೇ ಅಡ್ಡರಸ್ತೆ, ಮಲ್ಲೇಶ್ವರಂ,
ಬೆಂಗಳೂರು- 560003.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು- 3).

ಪಿ. ಆರ್. 895

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 19 ಎಲ್ಆರ್ಎ 2000 ಬೆಂಗಳೂರು, ದಿನಾಂಕ 29ನೇ ಜುಲೈ 2003**

ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961 (1962ರ 10ನೇ ಸಂಖ್ಯೆಯ ಕರ್ನಾಟಕ ಕಾಯ್ದೆ ತಿದ್ದುಪಡಿಯಾದಂತೆ) ರ ಕಲಂ 48ರ ಉಪ ಕಲಂ 1 ರಿಂದ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ನಗರ ಜಿಲ್ಲೆಯ, ಬೆಂಗಳೂರು ದಕ್ಷಿಣ ತಾಲ್ಲೂಕು ಭೂನ್ಯಾಯ ಮಂಡಳಿಗಳನ್ನು ಈ ಹಿಂದೆ ಇದೇ ಸಮಸಂಖ್ಯೆಯ ದಿನಾಂಕ: 20.10.2000ದ ಅಧಿಸೂಚನೆಯಲ್ಲಿ ಮಾಡಿದ್ದ ನಾಮನಿರ್ದೇಶನಗಳನ್ನು ಸೇರಿಸಿ ಶ್ರೀ ಡಿ. ಸಾದಪ್ಪ (ಎಸ್. ಟಿ) ಬಿನ್ ದೊಡ್ಡ ರಾಮಯ್ಯ, ನಂ. 324:9, ಪಟೇಲ ಹನುಮಯ್ಯ ಬಡಾವಣೆ, ಬಾಹುಬಲಿನಗರ, ಜಾಲಹಳ್ಳಿ ಗ್ರಾಮ, ಬೆಂಗಳೂರು 13 ಇವರನ್ನು ನಾಮನಿರ್ದೇಶನ ಮಾಡಿ ಸದರಿ ಭೂ ನ್ಯಾಯ ಮಂಡಳಿಯನ್ನು ಪುನರ್ ರಚಿಸಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂ. ಸು).

ಪಿ. ಆರ್. 896

### ಅಧಿಸೂಚನೆ

**ಸಂಖ್ಯೆ: ಕಂಇ 21 ಎಲ್ಆರ್ಎಂ 2003 ಬೆಂಗಳೂರು, ದಿನಾಂಕ 28ನೇ ಜುಲೈ 2003**

ಮಹಿಷಿ ಫ್ಯಾಮಿಲಿ ಪಬ್ಲಿಕ್ ಚಾರಿಟಬಲ್ ಟ್ರಸ್ಟ್, ಧಾರವಾಡ ಇವರು ಧಾರವಾಡ ಜಿಲ್ಲೆಯ, ಧಾರವಾಡ ತಾಲ್ಲೂಕು, ಅಳ್ನಾವರ ಹೋಬಳಿ, ದಡ್ಡಿಕಮಲಾಪುರ ಗ್ರಾಮದ ಸ.ನಂ: 3ರಲ್ಲಿ 3.00 ಎಕರೆ ಜಮೀನನ್ನು ವೃದ್ಧ, ಅಂಗವಿಕಲ ಮತ್ತು ನಿರ್ಗತಿಕ ಹೆಂಗಸರಿಗೆ ಪಾಲನಾ ಕೇಂದ್ರ ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ಮತ್ತು 15ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಧಾರವಾಡ ಇವರು ತಮ್ಮ ಪತ್ರ ಸಂಖ್ಯೆ: ಕೆವಿಎಲ್ಆರ್ಎಫ್: ವಿ.ಸಿ.ಆರ್:11: 02-03 ದಿನಾಂಕ: 29.1.2003 ಮತ್ತು 21.3.2003 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸ. ನಂಬರ್‌ನಲ್ಲಿ ಒಟ್ಟು 3.00 ಎಕರೆ ಜಮೀನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಪಿಟಿಸಿಎಲ್) ಕಾಯ್ದೆ, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು, ಹಾಗೂ ಇನ್ನಿತರ ಪರಭಾರೆ ನಿಷೇದ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ ಮತ್ತು ಯಾವುದೇ ವಿವಾದಗಳಿಂದ ಕೂಡಿರುವುದಿಲ್ಲ.

ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 109 (1ಎ)ರಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಹಾಗೂ ಕಾರಣಗಳನ್ನು ದಾಖಲಿಸುವ ಷರತ್ತಿಗೊಳಪಟ್ಟು ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೆ ವಿಸ್ತೀರ್ಣದ ಜಮೀನು ಖರೀದಿಸಲು ವಿನಾಯ್ತಿ ನೀಡಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995ರ ಕಲಂ 109 (1ಎ) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ನಿಯಮ 1996ರ ನಿಯಮ 38ಬಿ ಮತ್ತು 38ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಧಾರವಾಡ ತಾಲ್ಲೂಕು, ಅಳ್ನಾವರ ಹೋಬಳಿ, ದೊಡ್ಡಿ ಕಮಲಾಪುರ ಗ್ರಾಮದ ಸರ್ವೆ ನಂ: 3 ರಲ್ಲಿ 3.00 ಎಕರೆ ಜಮೀನನ್ನು ಖರೀದಿಸಿ ವೃದ್ಧ ಅಂಗವಿಕಲ ಮತ್ತು ನಿರ್ಗತಿಕ ಹೆಂಗಸರಿಗೆ ಪಾಲನ ಕೇಂದ್ರ ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಲು ಮಹಿಷಿ ಪ್ಯಾಮಿಲಿ ಪಬ್ಲಿಕ್ ಚಾರಿಟಬಲ್ ಟ್ರಸ್ಟ್, ಧಾರವಾಡ ಇವರು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109 (1ಎ) ರಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು;
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಶೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗಧಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ: ಓಡಿಸಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ, 1961ರ ಕಲಂ 109 ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಪಿ. ಆರ್. 897

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂಸು).

**ಅಧಿಸೂಚನೆ**

**ಸಂಖ್ಯೆ: ಕಂಇ 66 ಎಲ್‌ಆರ್‌ಎ 2000 ಬೆಂಗಳೂರು, ದಿನಾಂಕ 29ನೇ ಜುಲೈ 2003**

ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961 (1962ರ 10ನೇ ಸಂಖ್ಯೆಯ ಕರ್ನಾಟಕ ಕಾಯ್ದೆ ತಿದ್ದುಪಡಿಯಾದಂತೆ)ರ ಕಲಂ 48ರ ಉಪ ಕಲಂ 1 ರಿಂದ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕು ಭೂನ್ಯಾಯ ಮಂಡಳಿಗೆ ಈ ಹಿಂದೆ ಇದೇ ಸಮ ಸಂಖ್ಯೆಯ ದಿನಾಂಕ: 11.10.2000ರ ಅಧಿಸೂಚನೆಯಲ್ಲಿ ಮಾಡಿದ್ದ ನಾಮ ನಿರ್ದೇಶನಗಳಲ್ಲಿ ಶ್ರೀ ಎಂ. ಕೃಷ್ಣಪ್ಪ, ಅವರ ನಾಮ ನಿರ್ದೇಶನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಅವರ ಬದಲಿಗೆ ಶ್ರೀ ವಿ. ಎಲ್. ಈಶ್ವರಯ್ಯ ಬಿನ್ ಲಿಂಗಣ್ಣ ವಡ್ಡನಹಳ್ಳಿ, ಆರೂಡಿ ಅಂಚೆ, ದೊಡ್ಡಬಳ್ಳಾಪುರ ತಾಲ್ಲೂಕು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದರಿ ಭೂ ನ್ಯಾಯ ಮಂಡಳಿಗೆ ನಾಮ ನಿರ್ದೇಶನ ಮಾಡಿ, ಪುನರ್ ರಚಿಸಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಪಿ. ಆರ್. 898

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂಸು).

**ಅಧಿಸೂಚನೆ**

**ಸಂಖ್ಯೆ: ಕಂಇ 67 ಎಲ್‌ಆರ್‌ಎಂ 2001 ಬೆಂಗಳೂರು, ದಿನಾಂಕ 29ನೇ ಜುಲೈ 2003**

ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕು, ರಾಜನಹಳ್ಳಿ ಗ್ರಾಮದ ಸ.ನಂ: 106, 107, 110 ಮತ್ತು 111 ರಲ್ಲಿ ಒಟ್ಟು 17.18 ಎಕರೆ ಜಮೀನನ್ನು ಮಹರ್ಷಿ ವಾಲ್ಮೀಕಿ ಗುರು ಪೀಠ ಟ್ರಸ್ಟ್‌ರವರು ಶ್ರೀ. ವಾಲ್ಮೀಕಿ ಸಮಾಜದ ಗುರುಪೀಠ ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಿದ್ದು ಅದಕ್ಕೆ ಈಗ ಘಟನೋತ್ತರ ಮಂಜೂರಾತಿ ಕೋರಿದ್ದು, ಅವರು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಕಂ: ಭೂಸು:ಸಿಆರ್: 141: 98,99, ದಿನಾಂಕ:

15.2.2001 ಮತ್ತು 23.1.2003 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರ್‌ಗಳಲ್ಲಿ ಒಟ್ಟು 17.18 ಎಕರೆ ಜಮೀನು ಖರೀದಿಸಿದ್ದು ಸದರಿ ಸಂಸ್ಥೆಗೆ ಘಟನೋತ್ತರ ಅನುಮೋದನೆ ನೀಡುವಂತೆ ಕೋರಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಪಿಟಿಸಿಎಲ್) ಕಾಯ್ದೆ, 1978 ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇದ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ ಮತ್ತು ಯಾವುದೇ ವಿವಾದಗಳಿಂದ ಕೂಡಿರುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ) ರಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಹಾಗೂ ಕಾರಣಗಳನ್ನು ದಾಖಲಿಸುವ ಷರತ್ತಿಗೊಳಪಟ್ಟು ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೆ ವಿಸ್ತೀರ್ಣದ ಜಮೀನು ಖರೀದಿಸಲು ವಿನಾಯ್ತಿ ನೀಡಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995ರ ಕಲಂ 109 (1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮ 1996ರ ನಿಯಮ 38ಬಿ ಮತ್ತು 38ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಹರಿಹರ ತಾಲ್ಲೂಕು, ರಾಜನಹಳ್ಳಿ ಗ್ರಾಮದ ಸರ್ವೆ ನಂ: 106, 107, 110 ಮತ್ತು 111 ರಲ್ಲಿ ಒಟ್ಟು 17.18 ಎಕರೆ ಜಮೀನನ್ನು ಶ್ರೀ ವಾಲ್ಮೀಕಿ ಸಮಾಜದ ಗುರುಪೀಠ ಸ್ಥಾಪಿಸುವ ಉದ್ದೇಶಕ್ಕಾಗಿ ಕಾಯ್ದೆ ಮತ್ತು ನಿಯಮಗಳನ್ನು ಉಲ್ಲಂಘನೆ ಮಾಡಿ ಜಮೀನು ಖರೀದಿಸಿದ್ದನ್ನು ಪರಿಶೀಲಿಸಿದ ಸರ್ಕಾರವು ಸಾಮಾಜಿಕ ಹಿತ ದೃಷ್ಟಿಯಿಂದ ಮನ್ನಿಸಿ ಘಟನೋತ್ತರ ಅನುಮೋದನೆಯನ್ನು ನೀಡಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ)ರಡಿ, ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಘಟನೋತ್ತರ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಶೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ: ಓಡಿಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ, 1961ರ ಕಲಂ 109 ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಪಿ. ಆರ್. 899

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂಸು).

**ಅಧಿಸೂಚನೆ**

**ಸಂಖ್ಯೆ: ಕಂಇ 76 ಎಲ್‌ಆರ್‌ಎಂ 2003 ಬೆಂಗಳೂರು, ದಿನಾಂಕ 5ನೇ ಆಗಸ್ಟ್ 2003**

ಸಹೃದಯ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇವರು ಮೈಸೂರು ತಾಲ್ಲೂಕು, ವರುಣ ಹೋಬಳಿ, ಚಿಕ್ಕಹಳ್ಳಿ ಗ್ರಾಮದ ಸರ್ವೆ ನಂ: 76:1 ರಲ್ಲಿ 2-12 ಎಕರೆ, 76:2 ರಲ್ಲಿ 2-27 ಎಕರೆ, 76:3ರಲ್ಲಿ 0-22 ಗುಂಟೆ, 76:4ರಲ್ಲಿ 0-21 ಗುಂಟೆ, 77:1ರಲ್ಲಿ 1-16 ಎಕರೆ, 77:2ರಲ್ಲಿ 1-15 ಎಕರೆ ಹೀಗೆ ಒಟ್ಟು 8-33 ಎಕರೆ ಜಮೀನನ್ನು ವಸತಿ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ಹಾಗೂ 15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್: ಎಸ್‌ಪಿಎಲ್:3: 2002-03 ದಿನಾಂಕ: 20.9.2002 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು 8-33 ಎಕರೆ ಜಮೀನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾಪಿತ ಸಂಸ್ಥೆಯು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮೈಸೂರು ಅವರಲ್ಲಿ ನೋಂದಣಿ ಸಂಖ್ಯೆ: ಎಆರ್:41: ಎಂಕೆಟಿ-1: ಆರ್‌ಜಿಎಸ್: 2434- 98-99 ರವರಿಂದ ದಿನಾಂಕ: 28.9.98 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್

ವರದಿ, ನಕ್ಷೆ, ಮೆಮೊರಾಂಡಮ್ ಆಫ್ ಅಸೋಸಿಯೇಷನನ್ನು ಸಲ್ಲಿಸಿದ್ದು, ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರುಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಹಜಪನ) ಕಾಯ್ದೆ, 1978, ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ, 1969, ಹಾಗೂ ಇನಾಂ ಕಾಯ್ದೆಯ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109 (1) (iv)ರ ಪ್ರಕಾರ ವಸತಿ ಉದ್ದೇಶಕ್ಕೆ 10 ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995ರ ಕಲಂ 109 (i) (iv) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮ, 1996ರ ನಿಯಮ 38ಬಿ (4) (ಸಿ) (i) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯ್ತಿ ನೀಡಿ ಮೈಸೂರು ತಾಲ್ಲೂಕು, ವರುಣ ಹೋಬಳಿ, ಚಿಕ್ಕಹಳ್ಳಿ ಗ್ರಾಮದ ಸರ್ವೆ ನಂ: 76:1ರಲ್ಲಿ 2-12 ಎಕರೆ, 76:2ರಲ್ಲಿ 2-27 ಎಕರೆ, 76:3ರಲ್ಲಿ 0-22 ಗುಂಟೆ, 76:4ರಲ್ಲಿ 0-21 ಗುಂಟೆ, 77:1ರಲ್ಲಿ 1-16 ಎಕರೆ ಮತ್ತು 77:2ರಲ್ಲಿ 1-15 ಎಕರೆ ಹೀಗೆ ಒಟ್ಟು 8-33 ಎಕರೆ ಜಮೀನನ್ನು ಸಹೃದಯ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇವರಿಗೆ ವಸತಿ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109 (i) (iv) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಶೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಪ್ರಸ್ತಾಪಿತ ಜಮೀನುಗಳನ್ನು ಸಂಘ ಖರೀದಿಸಿದ ನಂತರ ನಿಗದಿತ ಪ್ರಾಧಿಕಾರದಿಂದ ಭೂ ಕಂದಾಯ ಕಾಯ್ದೆ, 1964ರ ಕಲಂ 95 ರಂತೆ ಭೂ ಪರಿವರ್ತನೆಗೆ ಅನುಮತಿ ಪಡೆದಿರುವುದಲ್ಲದೆ ಯೋಜನೆ ಮತ್ತು ನಕ್ಷೆಯನ್ನು ನಿಗದಿತ ಪ್ರಾಧಿಕಾರದಿಂದ ಅನುಮೋದಿಸಿಕೊಂಡ ನಂತರವೇ ಬಡಾವಣೆ ರಚಿಸತಕ್ಕದ್ದು.
4. ಸದರಿ ಸಂಸ್ಥೆಯವರು ಭೂ ಸುಧಾರಣೆ ನಿಯಮ (ತಿದ್ದುಪಡಿ) 1996ರ ಅನ್ವಯ ಶೇಕಡ 30ನ್ನು ಕಡಿಮೆ ಆದಾಯ ವರ್ಗದವರಿಗೆ ಹಾಗೂ ಶೇಕಡ 20ನ್ನು ಮಧ್ಯಮ ಆದಾಯ ವರ್ಗದವರಿಗೂ ಕಾಯ್ದಿರಿಸಿ ಹಂಚಿಕೆ ಮಾಡತಕ್ಕದ್ದು ಹಾಗೂ ಸ್ಥಳೀಯ ಪ್ರಾಧಿಕಾರದವರು ರೂಪಿಸಿರುವ ನಿಬಂಧನೆಗಳಿಗೆ ಒಳಪಟ್ಟಿರತಕ್ಕದ್ದು.
5. ಸದರಿ ಸಂಸ್ಥೆಯವರು ಭೂ ಸುಧಾರಣೆ (ತಿದ್ದುಪಡಿ) ನಿಯಮ 1996ರ ನಿಯಮ 38ಬಿ (4) (ಬಿ) ಮತ್ತು (ಸಿ)ರ ಷರತ್ತಿಗೊಳಪಟ್ಟು ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯು ರಚಿಸಲಾದ ಷರತ್ತಿನ ಅನ್ವಯ ರೂಪಿಸಿರುವ ನಿಬಂಧನೆಗಳಿಗೆ ಒಳಪಟ್ಟಿರತಕ್ಕದ್ದು.
6. ಸದರಿ ಗೃಹ ನಿರ್ಮಾಣ ಸಂಘ ಸಂಸ್ಥೆಗಳು ಯಾವುದೇ ವಸತಿ ಸೌಲಭ್ಯ ಅಥವಾ ನಿವೇಶನ ಹೊಂದದ ತನ್ನ ಸದಸ್ಯರುಗಳಿಗೆ ಮಾತ್ರ ಅವರ ಹೆಸರಿನಲ್ಲೇ ನಿವೇಶನ ಮಂಜೂರು ಮಾಡತಕ್ಕದ್ದು.
7. ಸಹಕಾರ ಸಂಘದವರು ದಾಖಲೆ ಆಸ್ತಿ ನೋಂದಣಿ ಮಾಡುವ ಸಂದರ್ಭದಲ್ಲಿ ಸಂಬಂಧಪಟ್ಟ ಉಪ ನೋಂದಣಾಧಿಕಾರಿಯವರ ಮುಂದೆ ಅಫಿಡವಿಟ್ ಒಂದನ್ನು ಕಡ್ಡಾಯವಾಗಿ ಸಲ್ಲಿಸಬೇಕು; ಈ ಸಂಬಂಧದಲ್ಲಿ ಸಂಬಂಧಪಟ್ಟ ಅಭಿವೃದ್ಧಿ ಪ್ರಾಧಿಕಾರ ಅಥವಾ ಇತರೆ ಸ್ಥಳೀಯ ಪ್ರಾಧಿಕಾರದ ನಿಯಮಗಳನ್ನು ಅಳವಡಿಸತಕ್ಕದ್ದು.
8. ಈ ಜಮೀನನ್ನು ನಗರಾಭಿವೃದ್ಧಿ ಪ್ರಾಧಿಕಾರದ ಓಡಿಪಿ: ಸಿಡಿಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
9. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ ಕಲಂ 109 ರನ್ವಯ ಮಾತ್ರ ಇರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾಗಿದ್ದಲ್ಲಿ ಸಂಬಂಧಪಟ್ಟ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
10. ಹಂಚಿಕೆದಾರರು ತಾನು ಯಾವುದೇ ನಿವೇಶನ ಅಥವಾ ಮನೆಯನ್ನು ಹೊಂದಿಲ್ಲವೆಂಬ ಬಗ್ಗೆ ನೋಂದಣಿ ಮಾಡುವ ಸಮಯದಲ್ಲಿ ಅಫಿಡವಿಟ್ ಒಂದನ್ನು ಉಪ ನೋಂದಣಾಧಿಕಾರಿಯವರ ಎದುರಿನಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು.
11. ಮೇಲ್ಕಂಡ ಷರತ್ತುಗಳನ್ನೇನಾದರು ಉಲ್ಲಂಘಿಸಿದಲ್ಲಿ ಭೂ ಸುಧಾರಣೆ ಕಾಯ್ದೆ 109 (2) ರಂತೆ ಸರ್ಕಾರ ತನಿಖೆ ಮಾಡಿ, ಅವಶ್ಯಕ ಎನಿಸಿದಲ್ಲಿ ನೀಡಿರುವ ವಿನಾಯ್ತಿಯನ್ನು ರದ್ದುಪಡಿಸಲಾಗುವುದು ಮತ್ತು ಕಂಡವಾಗಿ ಜಮೀನನ್ನು ಯಾವುದೇ ಋಣಭಾರ ಇಲ್ಲದೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅದಕ್ಕಾಗಿ ಯಾವುದೇ ಹಣ ನೀಡಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ವಿ. ರಾಧಾಕೃಷ್ಣ

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಭೂಸು).

ಪಿ. ಆರ್. 900

**ಅಧಿಸೂಚನೆ**

**ಸಂಖ್ಯೆ: ಕಂಇ 75 ಎಲ್‌ಆರ್‌ಎಂ 2003 ಬೆಂಗಳೂರು, ದಿನಾಂಕ 6ನೇ ಆಗಸ್ಟ್ 2003**

ಸಿದ್ದಲಿಂಗೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇವರು ಮೈಸೂರು ತಾಲ್ಲೂಕು, ಕಸಬಾ ಹೋಬಳಿ, ಕುಪ್ಪಲೂರು ಗ್ರಾಮದ ಸರ್ವೆ ನಂ: 31ರಲ್ಲಿ 3-00 ಎಕರೆ, 35ರಲ್ಲಿ 5-00 ಎಕರೆ, 36:2ರಲ್ಲಿ 4-24 ಎಕರೆ, 36:5ರಲ್ಲಿ 2-35 ಎಕರೆ, 36:6ರಲ್ಲಿ 3-08 ಎಕರೆ, 36:7 ರಲ್ಲಿ 2-14 ಎಕರೆ, ಹೀಗೆ ಒಟ್ಟು 21-01 ಎಕರೆ ಜಮೀನನ್ನು ವಸತಿ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ಹಾಗೂ 15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್: ಎಸ್‌ಪಿಎಲ್:6: 2000-01 ದಿನಾಂಕ: 17.03.2003 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು 21-01 ಎಕರೆ ಜಮೀನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109 (i) (iv) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾಪಿತ ಸಂಸ್ಥೆಯು ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಅವರಲ್ಲಿ ನೋಂದಣಿ ಸಂಖ್ಯೆ: ಆರ್‌ಎಂ:ಸಿ1: ಆರ್‌ಜಿಎನ್: 23516: 96-97 ದಿನಾಂಕ: 25.5.96 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು, ಪ್ರಾಜೆಕ್ಟ್ ವರದಿ, ನಕ್ಷೆ, ಮೆಮೊರಾಂಡಮ್ ಆಫ್ ಅಸೋಸಿಯೇಷನನ್ನು ಸಲ್ಲಿಸಿದ್ದು, ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಹಜಪನಿ) ಕಾಯ್ದೆ, 1978 (ಪಿಟಿಸಿಎಲ್), ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ, 1969 ಹಾಗೂ ಇನಾಂ ಕಾಯ್ದೆಯ ವ್ಯಾಪ್ತಿಗೆ ಒಳಪಡುವುದಿಲ್ಲ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ, 1995ರ ಕಲಂ 109 (i) (iv) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮ, 1996ರ ನಿಯಮ 38ಬಿ (4) (ಸಿ) (1)ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಕಾಯ್ದೆಯ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯ್ತಿ ನೀಡಿ ಮೈಸೂರು ತಾಲ್ಲೂಕು, ಕಸಬಾ ಹೋಬಳಿ, ಕುಪ್ಪಲೂರು ಗ್ರಾಮದ ಸರ್ವೆ ನಂ: 31ರಲ್ಲಿ 3-00 ಎಕರೆ, 35ರಲ್ಲಿ 5-00 ಎಕರೆ, 36:2ರಲ್ಲಿ 4-24 ಎಕರೆ, 36:5ರಲ್ಲಿ 2-35 ಎಕರೆ 36:6ರಲ್ಲಿ 3-08 ಎಕರೆ, 36:7ರಲ್ಲಿ 2-14 ಎಕರೆ ಹೀಗೆ ಒಟ್ಟು 21-01 ಎಕರೆ ಜಮೀನನ್ನು ಸಿದ್ದಲಿಂಗೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇವರಿಗೆ ವಸತಿ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ (i) (iv) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಶೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಪ್ರಸ್ತಾಪಿತ ಜಮೀನುಗಳನ್ನು ಸಂಘ ಖರೀದಿಸಿದ ನಂತರ ನಿಗದಿತ ಪ್ರಾಧಿಕಾರದಿಂದ ಭೂ ಕಂದಾಯ ಕಾಯ್ದೆ, 1964ರ ಕಲಂ 95 ರಂತೆ ಭೂ ಪರಿವರ್ತನೆಗೆ ಅನುಮತಿ ಪಡೆದಿರುವುದಲ್ಲದೆ ಯೋಜನೆ ಮತ್ತು ನಕ್ಷೆಯನ್ನು ನಿಗದಿತ ಪ್ರಾಧಿಕಾರದಿಂದ ಅನುಮೋದಿಸಿಕೊಂಡ ನಂತರವೇ ಬಡಾವಣೆ ರಚಿಸತಕ್ಕದ್ದು.
4. ಸದರಿ ಸಂಸ್ಥೆಯವರು ಭೂ ಸುಧಾರಣೆ ನಿಯಮ (ತಿದ್ದುಪಡಿ) 1996ರ ಅನ್ವಯ ಶೇಕಡ 30ನ್ನು ಕಡಿಮೆ ಆದಾಯ ವರ್ಗದವರಿಗೆ ಹಾಗೂ ಶೇಕಡ 20ನ್ನು ಮಧ್ಯಮ ಆದಾಯ ವರ್ಗದವರಿಗೂ ಕಾಯ್ದಿರಿಸಿ ಹಂಚಿಕೆ ಮಾಡತಕ್ಕದ್ದು ಹಾಗೂ ಸ್ಥಳೀಯ ಪ್ರಾಧಿಕಾರದವರು ರೂಪಿಸಿರುವ ನಿಬಂಧನೆಗಳಿಗೆ ಒಳಪಟ್ಟಿರತಕ್ಕದ್ದು.
5. ಸದರಿ ಸಂಸ್ಥೆಯವರು ಭೂ ಸುಧಾರಣೆ (ತಿದ್ದುಪಡಿ) ನಿಯಮ 1996ರ ನಿಯಮ 38ಬಿ (4) (ಬಿ) ಮತ್ತು (ಸಿ)ರ ಷರತ್ತಿಗೊಳಪಟ್ಟು ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯು ರಚಿಸಲಾದ ಷರತ್ತಿನ ಅನ್ವಯ ರೂಪಿಸಿರುವ ನಿಬಂಧನೆಗಳಿಗೆ ಒಳಪಟ್ಟಿರತಕ್ಕದ್ದು.
6. ಸದರಿ ಗೃಹ ನಿರ್ಮಾಣ ಸಂಘ ಸಂಸ್ಥೆಗಳು ಯಾವುದೇ ವಸತಿ ಸೌಲಭ್ಯ ಅಥವಾ ನಿವೇಶನ ಹೊಂದದ ತನ್ನ ಸದಸ್ಯರುಗಳಿಗೆ ಮಾತ್ರ ಅವರ ಹೆಸರಿನಲ್ಲೇ ನಿವೇಶನ ಮಂಜೂರು ಮಾಡತಕ್ಕದ್ದು.
7. ಸಹಕಾರ ಸಂಘದವರು ದಾಖಲೆ ಆಸ್ತಿ ನೋಂದಣಿ ಮಾಡುವ ಸಂದರ್ಭದಲ್ಲಿ ಸಂಬಂಧಪಟ್ಟ ಉಪ ನೋಂದಣಾಧಿಕಾರಿಯವರ ಮುಂದೆ ಅಫಿಡವಿಟ್ ಒಂದನ್ನು ಕಡ್ಡಾಯವಾಗಿ ಸಲ್ಲಿಸಬೇಕು; ಈ ಸಂಬಂಧದಲ್ಲಿ ಸಂಬಂಧಪಟ್ಟ ಅಭಿವೃದ್ಧಿ ಪ್ರಾಧಿಕಾರ ಅಥವಾ ಇತರೆ ಸ್ಥಳೀಯ ಪ್ರಾಧಿಕಾರದ ನಿಯಮಗಳನ್ನು ಅಳವಡಿಸತಕ್ಕದ್ದು.
8. ಈ ಜಮೀನನ್ನು ನಗರಾಭಿವೃದ್ಧಿ ಪ್ರಾಧಿಕಾರದ ಓಡಿಪಿ: ಸಿಡಿಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
9. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ ಕಲಂ 109 ರನ್ವಯ ಮಾತ್ರ ಇರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾಗಿದ್ದಲ್ಲಿ ಸಂಬಂಧಪಟ್ಟ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

10. ಹಂಚಿಕೆದಾರರು ತಾನು ಯಾವುದೇ ನಿವೇಶನ ಅಥವಾ ಮನೆಯನ್ನು ಹೊಂದಿಲ್ಲವೆಂಬ ಬಗ್ಗೆ ನೋಂದಣಿ ಮಾಡುವ ಸಮಯದಲ್ಲಿ ಅಫಿಡವಿಟ್ ಒಂದನ್ನು ಉಪ ನೋಂದಣಾಧಿಕಾರಿಯವರ ಎದುರಿನಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು.
11. ಮೇಲ್ಕಂಡ ಷರತ್ತುಗಳನ್ನೇನಾದರು ಉಲ್ಲಂಘಿಸಿದಲ್ಲಿ ಭೂ ಸುಧಾರಣೆ ಕಾಯ್ದೆ 109 (2) ರಂತೆ ಸರ್ಕಾರ ತನಿಖೆ ಮಾಡಿ, ಅವಶ್ಯಕ ಎನಿಸಿದಲ್ಲಿ ನೀಡಿರುವ ವಿನಾಯ್ತಿಯನ್ನು ರದ್ದುಪಡಿಸಲಾಗುವುದು ಮತ್ತು ಕಂಡವಾಗಿ ಜಮೀನನ್ನು ಯಾವುದೇ ಋಣಭಾರ ಇಲ್ಲದೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅದಕ್ಕಾಗಿ ಯಾವುದೇ ಹಣ ನೀಡಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಪಿ. ಆರ್. 901

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂಸು).

**ಅಧಿಸೂಚನೆ**

**ಸಂಖ್ಯೆ: ಕಂಇ 78 ಎಲ್‌ಆರ್‌ಎಂ 2003 ಬೆಂಗಳೂರು, ದಿನಾಂಕ 2ನೇ ಆಗಸ್ಟ್ 2003**

ಕರ್ನಾಟಕ ಪೊಲೀಸ್ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ, ನಿಯಮಿತ, ಮೈಸೂರು ಇವರು ಮೈಸೂರು ತಾಲ್ಲೂಕು, ವರುಣಾ ಹೋಬಳಿ, ಲಲಿತಾದ್ರಿಪುರ ಗ್ರಾಮದ ಸರ್ವೆ ನಂ:19:1 ಹಾಗೂ ಇತರೆಗಳಲ್ಲಿ 99-05 1/2 ಎಕರೆ ಜಮೀನನ್ನು ವಸತಿ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎಎ ಹಾಗೂ 15ಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್: ಎಸ್‌ಪಿಎಲ್: 10: 2002-03 ದಿನಾಂಕ: 17.2.2003 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು 99-05 1/2 ಎಕರೆ ಜಮೀನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (i) (iv) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾಪಿತ ಸಂಸ್ಥೆಯು ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಅವರಲ್ಲಿ ನೋಂದಣಿ ಸಂಖ್ಯೆ: ಎಆರ್‌ಎಂ:ಪಿಎಲ್‌ಎನ್: ರಿಜಿಸ್ಟ್ರೇಷನ್: 7965: 80-81 ದಿನಾಂಕ: 30.7.1980 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು, ಪ್ರಾಜೆಕ್ಟ್ ವರದಿ, ನಕ್ಷೆ, ಮೆಮೊರಾಂಡಮ್ ಆಫ್ ಅಸೋಸಿಯೇಷನನ್ನು ಸಲ್ಲಿಸಿದ್ದು, ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಹಜಪನಿ) ಕಾಯ್ದೆ, 1978 (ಪಿಟಿಸಿಎಲ್) ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ, 1969 ಹಾಗೂ ಇನಾಂ ಕಾಯ್ದೆಯ ವ್ಯಾಪ್ತಿಗೆ ಒಳಪಡುವುದಿಲ್ಲ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ, 1995ರ ಕಲಂ 109 (i) (iv) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮ, 1996ರ ನಿಯಮ 38ಬಿ (4) (ಸಿ) (1) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಕಾಯ್ದೆಯ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯ್ತಿ ನೀಡಿ ಮೈಸೂರು ತಾಲ್ಲೂಕು, ವರುಣಾ ಹೋಬಳಿ, ಲಲಿತಾದ್ರಿಪುರ ಗ್ರಾಮದ ಸರ್ವೆ ನಂ: 19:1 ಹಾಗೂ ಇತರೆಗಳಲ್ಲಿ ಹೀಗೆ ಒಟ್ಟು 99-05 1/2 ಎಕರೆ ಜಮೀನನ್ನು ಕರ್ನಾಟಕ ಪೊಲೀಸ್ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇವರಿಗೆ ವಸತಿ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109(i) (iv) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಶೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಪ್ರಸ್ತಾಪಿತ ಜಮೀನುಗಳನ್ನು ಸಂಘ ಖರೀದಿಸಿದ ನಂತರ ನಿಗದಿತ ಪ್ರಾಧಿಕಾರದಿಂದ ಭೂ ಕಂದಾಯ ಕಾಯ್ದೆ, 1964ರ ಕಲಂ 95 ರಂತೆ ಭೂ ಪರಿವರ್ತನೆಗೆ ಅನುಮತಿ ಪಡೆದಿರುವುದಲ್ಲದೆ ಯೋಜನೆ ಮತ್ತು ನಕ್ಷೆಯನ್ನು ನಿಗದಿತ ಪ್ರಾಧಿಕಾರದಿಂದ ಅನುಮೋದಿಸಿಕೊಂಡ ನಂತರವೇ ಬಡಾವಣೆ ರಚಿಸತಕ್ಕದ್ದು.
4. ಸದರಿ ಸಂಸ್ಥೆಯವರು ಭೂ ಸುಧಾರಣೆ ನಿಯಮ (ತಿದ್ದುಪಡಿ) 1996ರ ಅನ್ವಯ ಶೇಕಡ 30ನ್ನು ಕಡಿಮೆ ಆದಾಯ ವರ್ಗದವರಿಗೆ ಹಾಗೂ ಶೇಕಡ 20ನ್ನು ಮಧ್ಯಮ ಆದಾಯ ವರ್ಗದವರಿಗೂ ಕಾಯ್ದಿರಿಸಿ ಹಂಚಿಕೆ ಮಾಡತಕ್ಕದ್ದು ಹಾಗೂ ಸ್ಥಳೀಯ ಪ್ರಾಧಿಕಾರದವರು ರೂಪಿಸಿರುವ ನಿಬಂಧನೆಗಳಿಗೆ ಒಳಪಟ್ಟಿರತಕ್ಕದ್ದು.
5. ಸದರಿ ಸಂಸ್ಥೆಯವರು ಭೂ ಸುಧಾರಣೆ (ತಿದ್ದುಪಡಿ) ನಿಯಮ 1996ರ ನಿಯಮ 38ಬಿ (4) (ಬಿ) ಮತ್ತು (ಸಿ)ರ ಷರತ್ತಿಗೊಳಪಟ್ಟು ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯು ರಚಿಸಲಾದ ಷರತ್ತಿನ ಅನ್ವಯ ರೂಪಿಸಿರುವ ನಿಬಂಧನೆಗಳಿಗೆ ಒಳಪಟ್ಟಿರತಕ್ಕದ್ದು.
6. ಸದರಿ ಗೃಹ ನಿರ್ಮಾಣ ಸಂಘ ಸಂಸ್ಥೆಗಳು ಯಾವುದೇ ವಸತಿ ಸೌಲಭ್ಯ ಅಥವಾ ನಿವೇಶನ ಹೊಂದದ ತನ್ನ ಸದಸ್ಯರುಗಳಿಗೆ ಮಾತ್ರ ಅವರ ಹೆಸರಿನಲ್ಲೇ ನಿವೇಶನ ಮಂಜೂರು ಮಾಡತಕ್ಕದ್ದು.

7. ಸಹಕಾರ ಸಂಘದವರು ದಾಖಲೆ ಆಸ್ತಿ ನೋಂದಣಿ ಮಾಡುವ ಸಂದರ್ಭದಲ್ಲಿ ಸಂಬಂಧಪಟ್ಟ ಉಪ ನೋಂದಣಾಧಿಕಾರಿಯವರ ಮುಂದೆ ಅಫಿಡವಿಟ್ ಒಂದನ್ನು ಕಡ್ಡಾಯವಾಗಿ ಸಲ್ಲಿಸಬೇಕು; ಈ ಸಂಬಂಧದಲ್ಲಿ ಸಂಬಂಧಪಟ್ಟ ಅಭಿವೃದ್ದಿ ಪ್ರಾಧಿಕಾರ ಅಥವಾ ಇತರೆ ಸ್ಥಳೀಯ ಪ್ರಾಧಿಕಾರದ ನಿಯಮಗಳನ್ನು ಅಳವಡಿಸತಕ್ಕದ್ದು.
8. ಈ ಜಮೀನನ್ನು ನಗರಾಭಿವೃದ್ದಿ ಪ್ರಾಧಿಕಾರದ ಓಡಿಪಿ: ಸಿಡಿಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
9. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ ಕಲಂ 109 ರನ್ವಯ ಮಾತ್ರ ಇರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾಗಿದ್ದಲ್ಲಿ ಸಂಬಂಧಪಟ್ಟ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
10. ಹಂಚಿಕೆದಾರರು ತಾನು ಯಾವುದೇ ನಿವೇಶನ ಅಥವಾ ಮನೆಯನ್ನು ಹೊಂದಿಲ್ಲವೆಂಬ ಬಗ್ಗೆ ನೋಂದಣಿ ಮಾಡುವ ಸಮಯದಲ್ಲಿ ಅಫಿಡವಿಟ್ ಒಂದನ್ನು ಉಪ ನೋಂದಣಾಧಿಕಾರಿಯವರ ಎದುರಿನಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು.
11. ಮೇಲ್ಕಂಡ ಷರತ್ತುಗಳನ್ನೇನಾದರು ಉಲ್ಲಂಘಿಸಿದಲ್ಲಿ ಭೂ ಸುಧಾರಣೆ ಕಾಯ್ದೆ 109 (2) ರಂತೆ ಸರ್ಕಾರ ತನಿಖೆ ಮಾಡಿ, ಅವಶ್ಯಕ ಎನಿಸಿದಲ್ಲಿ ನೀಡಿರುವ ವಿನಾಯ್ತಿಯನ್ನು ರದ್ದುಪಡಿಸಲಾಗುವುದು ಮತ್ತು ಕಂಡವಾಗಿ ಜಮೀನನ್ನು ಯಾವುದೇ ಋಣಭಾರ ಇಲ್ಲದೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅದಕ್ಕಾಗಿ ಯಾವುದೇ ಹಣ ನೀಡಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಪಿ. ಆರ್. 902

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂಸು).

**ಅಧಿಸೂಚನೆ**

**ಸಂಖ್ಯೆ: ಕಂಇ 131 ಎಲ್‌ಆರ್‌ಎಂ 99 ಬೆಂಗಳೂರು, ದಿನಾಂಕ 23ನೇ ಜುಲೈ 2003**

ಸಿಸ್ಟರ್ಸ್ ಆಫ್ ಚಾರಿಟಿ ಆಫ್ ನಜರತ್ ಸಂಸ್ಥೆ,- ಬಣಕಲ್, ಚಿಕ್ಕಮಗಳೂರು ಇವರು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕು, ಬಣಕಲ್ ಹೋಬಳಿ, ಕೂಡು-ಹಳ್ಳಿ ಗ್ರಾಮದ ಸ.ನಂ: 115ರಲ್ಲಿ 2.00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕೆ ಅಂದರೆ ಶಾಲಾ ಕಟ್ಟಡ, ವಸತಿ ಗೃಹ ಮತ್ತು ಇತರೆ ಸಾಮಾಜಿಕ ಉದ್ದೇಶಕ್ಕಾಗಿ ಖರೀದಿಸಲಾಗಿದ್ದು ಅದಕ್ಕೆ ಈಗ ಘಟನೋತ್ತರ ಮಂಜೂರಾತಿ ಕೋರಿದ್ದು, ಅವರು ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಂ2: ಎಲ್‌ಆರ್‌ಎಫ್: 99: 98-99 ದಿನಾಂಕ: 24.5.99 ಮತ್ತು 3.10.2002 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸ.ನಂಬರ್‌ನಲ್ಲಿ ಒಟ್ಟು 2-00 ಎಕರೆ ಜಮೀನು ಖರೀದಿಸಿದ್ದು ಸದರಿ ಸಂಸ್ಥೆಗೆ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಘಟನೋತ್ತರ ಅನುಮೋದನೆ ನೀಡುವಂತೆ ಕೋರಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಪಿಟಿಸಿಎಲ್) ಕಾಯ್ದೆ, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇದ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ; ಮತ್ತು ಯಾವುದೇ ವಿವಾದಗಳಿಂದ ಕೂಡಿರುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ)ರಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಹಾಗೂ ಕಾರಣಗಳನ್ನು ದಾಖಲಿಸುವ ಷರತ್ತಿಗೊಳಪಟ್ಟು ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೆ ವಿಸ್ತೀರ್ಣದ ಜಮೀನು ಖರೀದಿಸಲು ವಿನಾಯ್ತಿ ನೀಡಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995ರ ಕಲಂ 109 (1ಎ) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ನಿಯಮ 1996ರ ನಿಯಮ 38ಬಿ ಮತ್ತು 38ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಮೂಡಿಗೆರೆ ತಾಲ್ಲೂಕು, ಬಣಕಲ್ ಹೋಬಳಿ, ಕೂಡುವಳ್ಳಿ ಗ್ರಾಮದ ಸರ್ವೆ ನಂ: 115ರಲ್ಲಿ 2-00 ಎಕರೆ ಜಮೀನನ್ನು ಸಿಸ್ಟರ್ಸ್ ಆಫ್ ಚಾರಿಟಿ ನಜರತ್ ಸಂಸ್ಥೆ ಬಣಕಲ್, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರು ಶೈಕ್ಷಣಿಕ ಉದ್ದೇಶಕ್ಕಾಗಿ ಅಂದರೆ ಶಾಲಾ ಕಟ್ಟಡ, ವಸತಿ ಗೃಹ ಮತ್ತು ಇತರೆ ಸಾಮಾಜಿಕ ಉದ್ದೇಶಕ್ಕಾಗಿ ಕಾಯ್ದೆ ಮತ್ತು ನಿಯಮಗಳನ್ನು ಉಲ್ಲಂಘನೆ ಮಾಡಿ ಜಮೀನು ಖರೀದಿಸಿದ್ದನ್ನು ಪರಿಶೀಲಿಸಿದ ಸರ್ಕಾರವು ಸಾಮಾಜಿಕ ಹಿತ ದೃಷ್ಟಿಯಿಂದ ಮನ್ನಿಸಿ ಘಟನೋತ್ತರ ಅನುಮೋದನೆಯನ್ನು ನೀಡಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಘಟನೋತ್ತರ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಶೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ದಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ: ಓಡಿಪಿ ವ್ಯಾಪ್ತಿಯೊಳಗೆ ಬಂದರೆ ಆದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಪಿ. ಆರ್. 903

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂಸು).

## ಕಾನೂನು ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಲಾ 33 ಎಲ್ಎಜಿ 2003 ಬೆಂಗಳೂರು, ದಿನಾಂಕ: 29ನೇ ಜುಲೈ 2003**

ಸರ್ಕಾರದ ಅಧಿಸೂಚನೆ ಸಂ:ಲಾ 33 ಎಲ್ಎಜಿ 2003, ದಿನಾಂಕ: 16.6.2003ರ ಕ್ರಮ ಸಂಖ್ಯೆ: 11 ರಲ್ಲಿ ಶ್ರೀ ಎ. ಕೆ. ಮೆಣಸಿನಕಾಯಿ, ಅಪರ ಸರ್ಕಾರಿ ವಕೀಲರು, ಇವರ ಹೆಸರಿನ ಮುಂದೆ ನಮೂದಾಗಿರುವ ಸಕ್ರಮಗೊಳಿಸಿದ ಅವಧಿಯನ್ನು "01-01-2003 ರಿಂದ 04-04-2002" ಎಂಬುದರ ಬದಲಾಗಿ "01-01-2003 ರಿಂದ 04-04-2003" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ. ಆರ್. 904

ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ, (ಆಡಳಿತ-1).

### ಅಧಿಸೂಚನೆ

**ಸಂಖ್ಯೆ: ಲಾ 94 ಎಲ್ಎಜಿ 99 ಬೆಂಗಳೂರು, ದಿನಾಂಕ: 23ನೇ ಜುಲೈ 2003**

ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸರ್ಕಾರದ ಪರವಾಗಿ ಕ್ರಿಮಿನಲ್ ಮೊಕದ್ದಮೆಗಳಲ್ಲಿ ವಾದ ಮಾಡಲು ಈ ಕೆಳಕಂಡ ವಕೀಲರುಗಳನ್ನು ಅವರ ಅವಧಿ ಮುಗಿದ ದಿನದಿಂದ ಜಾರಿಗೆ ಬರುವಂತೆ ಎರಡು (2) ವರ್ಷದ ಅವಧಿಗೆ ಅಡಿಷನಲ್ ಸ್ಟೇಟ್ ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿ ನೇಮಕ ಮಾಡಲಾಗಿದೆ.

1. ಶ್ರೀ ಬಿ. ಸಿ. ಮುದ್ದಪ್ಪ, 2. ಶ್ರೀ ಎಂ. ಮರೀಗೌಡ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ. ಆರ್. 905

ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ, (ಆಡಳಿತ-1).

## ವಸತಿ ಸಚಿವಾಲಯ

### ಅಧಿಸೂಚನೆ

**ನಂ: ವಇ 53 ಕೊಮಂಇ 2003 ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2003**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಧಾರವಾಡ ನಗರದ ವ್ಯಾಪ್ತಿಯಲ್ಲಿರುವ ಜನ್ನತ್ ನಗರದ ವ್ಯಾಪ್ತಿಯಲ್ಲಿ ಬರುವ ಜನ್ನತ್ ನಗರ ಕೊಳಚೆ ಪ್ರದೇಶವನ್ನು ಬೆಳಗಾಂ ವಿಭಾಗಾಧಿಕಾರಿಗಳು ತಮ್ಮ ಅಧಿಸೂಚನೆ ಸಂಖ್ಯೆ: ಎಂಯುಎಸ್/ಬಿಜಿಎಂ/ಸಿಆರ್/ 62/ 94-95 ದಿನಾಂಕ: 11.4.1998 ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 (1974ರ ಕರ್ನಾಟಕ ಕಾಯ್ದೆ 33 ರಂತೆ) ರ ಕಲಂ 3 (1)ರಂತೆ ಕೊಳಚೆ ಪ್ರದೇಶವೆಂದು ಹಾಗೂ ಸದರಿ ಕಾಯ್ದೆ ಕಲಂ 11(1)ರ ಪ್ರಕಾರ ಜನ್ನತ್ ನಗರ ಕೊಳಚೆ ಪ್ರದೇಶವನ್ನು ಕೊಳಚೆ ನಿರ್ಮೂಲನ ಪ್ರದೇಶವೆಂದು ಬೆಳಗಾಂ ವಿಭಾಗಾಧಿಕಾರಿಗಳ ಅಧಿಸೂಚನೆ ಸಂಖ್ಯೆ: ಎಂಯುಎನ್ ಬಿಜಿಎಂ ಸಿಆರ್-62/94-95 ದಿನಾಂಕ: 19.2.2000ರಲ್ಲಿ ಅಂತಿಮವಾಗಿ ಘೋಷಿಸಿರುತ್ತಾರೆ.

ಸದರಿ ಪ್ರದೇಶವನ್ನು ಅಭಿವೃದ್ಧಿಗೊಳಿಸಿ ಅಲ್ಲಿ ವಾಸಿಸುವ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಉದ್ದೇಶಿಸಿದ್ದು ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಅಧಿನಿಯಮ ಕಲಂ 17 ರಂತೆ ಭೂಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವಾಗಿದೆ ಆದ್ದರಿಂದ ಸಂಬಂಧಿಸಿದವರಿಗೆ/ಸಾರ್ವಜನಿಕರಿಗೆ ಸೂಚನೆಯನ್ನು ನೀಡಿ ಸದರಿ ಪ್ರದೇಶದ ಬಗ್ಗೆ ಆಸಕ್ತಿಯುಳ್ಳವರು ಭೂಸ್ವಾಧೀನಮಾಡಬಾರದೆಂಬುದಕ್ಕೆ ಕಾರಣ/ ಆಕ್ಷೇಪಣೆ/ ಸಲಹೆ ಮತ್ತು ಮನವಿಗಳಿದ್ದಲ್ಲಿ ಈ ಅಧಿಸೂಚನೆ ಪ್ರಕಟವಾದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಸತಿ ಇಲಾಖೆ ಕರ್ನಾಟಕ ಸರ್ಕಾರದ ಸಚಿವಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು-1 ಇವರಿಗೆ ಸಲ್ಲಿಸುವಂತೆ ಕೋರಲಾಗಿದೆ.

**ಷೆಡ್ಯೂಲ್**

| ಕೊಳಚೆ ಪ್ರದೇಶದ ಹೆಸರು ಮತ್ತು ಇರುವ ಸ್ಥಳ | ಭೂ ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ ಎ-ಗುಂ | ಚಕ್ಕುಬಂದಿ |
|---|---|---|---|---|
| 1 | 2 | 3 | 4 | 5 |
| ಜನ್ನತ್ ನಗರ ಕೊಳಚೆ ಪ್ರದೇಶ | 1 ಪಾಟೀಲ ಗಂಗನಗೌಡ ತಂದೆ:ಶಿವನಗೌಡ<br>2 ಪಾಟೀಲ ಗಂಗನಗೌಡ ತಂದೆ:ಶಿವನಗೌಡ<br>3 ಪಾಟೀಲ ಚಂದ್ರೇಗೌಡ ತಂದೆ:ಶಿವನಗೌಡ<br>4 ಪಾಟೀಲ ಪಾರ್ವತೆವ್ವ ಕೋಂ. ಬಸವಗೌಡ<br>ಪಾಟೀಲ ಶಿವನಗೌಡ ತಂದೆ: ಬಸನಗೌಡ<br>ಪಾಟೀಲ ರಾಜೇಂದ್ರಗೌಡ ತಂದೆ: ಬಸನಗೌಡ<br>ಪಾಟೀಲ ಆನಂದಗೌಡ ತಂದೆ: ಬಸನಗೌಡ<br>5 ಪಾಟೀಲ ಶಂಕರಗೌಡ ತಂದೆ: ಶಿವನಗೌಡ | 22/1ಬಿ1 | 1-02 | **ಪೂರ್ವಕ್ಕೆ :** ಸ.ನಂ.22/2<br>**ಪಶ್ಚಿಮಕ್ಕೆ :** ಸ.ನಂ. 23 ಮತ್ತು 22/1 ಎ ರ<br>**ಉಳಿಕೆ ಉತ್ತರಕ್ಕೆ :** ರಸ್ತೆ<br>**ದಕ್ಷಿಣಕ್ಕೆ:** ಸ. ನಂ. 22/3 |
| | 1 ಪಾಟೀಲ ಗಂಗನಗೌಡ ತಂದೆ: ಶಿವನಗೌಡ<br>2 ಪಾಟೀಲ ನಿಂಗನಗೌಡ ತಂದೆ: ಶಿವನಗೌಡ<br>3 ಪಾಟೀಲ ಚಂದ್ರೇಗೌಡ ತಂದೆ: ಶಿವನಗೌಡ<br>4 ಪಾಟೀಲ ಪಾರ್ವತೆವ್ವ ಕೋಂ. ಬಸವಗೌಡ<br>ಪಾಟೀಲ ಶಿವನಗೌಡ ತಂದೆ: ಬಸನಗೌಡ<br>ಪಾಟೀಲ ರಾಜೇಂದ್ರಗೌಡ ತಂದೆ: ಬಸನಗೌಡ<br>ಪಾಟೀಲ ಆನಂದಗೌಡ ತಂದೆ: ಬಸನಗೌಡ<br>5 ಪಾಟೀಲ ಶಂಕರಗೌಡ ತಂದೆ: ಶಿವನಗೌಡ | 22/4ಬಿ | 1-24 | **ಪೂರ್ವಕ್ಕೆ :** ಸ.ನಂ.20<br>**ಪಶ್ಚಿಮಕ್ಕೆ :** ಸ.ನಂ. 27<br>**ಉತ್ತರಕ್ಕೆ :** ಸ.ನಂ. 22/4 ಅ<br>**ದಕ್ಷಿಣಕ್ಕೆ :** ಸ.ನಂ. 28/3 |
| | 1 ಪಾಟೀಲ ಗಂಗನಗೌಡ ತಂದೆ:ಶಿವನಗೌಡ<br>2 ಪಾಟೀಲ ನಿಂಗನಗೌಡ ತಂದೆ:ಶಿವನಗೌಡ<br>3 ಪಾಟೀಲ ಚಂದ್ರೇಗೌಡ ತಂದೆ:ಶಿವನಗೌಡ<br>4 ಪಾಟೀಲ ಪಾರ್ವತೆವ್ವ ಕೋಂ. ಬಸವಗೌಡ<br>ಪಾಟೀಲ ಶಿವನಗೌಡ ತಂದೆ: ಬಸನಗೌಡ<br>ಪಾಟೀಲ ರಾಜೇಂದ್ರಗೌಡ ತಂದೆ: ಬಸನಗೌಡ<br>ಪಾಟೀಲ ಆನಂದಗೌಡ ತಂದೆ: ಬಸನಗೌಡ<br>5 ಪಾಟೀಲ ಶಂಕರಗೌಡ ತಂದೆ: ಶಿವನಗೌಡ | 26/3 | 3-06 | **ಪೂರ್ವಕ್ಕೆ :** ರಿ.ಸ.ನಂ.27<br>**ಪಶ್ಚಿಮಕ್ಕೆ :** ರಿ.ಸ.ನಂ.26/3ರಉಳಿಕೆ<br>**ಉತ್ತರಕ್ಕೆ :** ಸ.ನಂ.26/3 ರ ಉಳಿಕೆ<br>**ದಕ್ಷಿಣಕ್ಕೆ :** ರಿ.ಸ.ನಂ.29 |
| | 1 ಪಾಟೀಲ ಗಂಗನಗೌಡ ತಂದೆ: ಶಿವನಗೌಡ<br>2 ಪಾಟೀಲ ನಿಂಗನಗೌಡ ತಂದೆ: ಶಿವನಗೌಡ<br>3 ಪಾಟೀಲ ಚಂದ್ರೇಗೌಡ ತಂದೆ: ಶಿವನಗೌಡ<br>4 ಪಾಟೀಲ ಪಾರ್ವತೆವ್ವ ಕೋಂ. ಬಸವಗೌಡ<br>ಪಾಟೀಲ ಶಿವನಗೌಡ ತಂದೆ: ಬಸನಗೌಡ<br>ಪಾಟೀಲ ರಾಜೇಂದ್ರಗೌಡ ತಂದೆ: ಬಸನಗೌಡ<br>ಪಾಟೀಲ ಆನಂದಗೌಡ ತಂದೆ: ಬಸನಗೌಡ<br>5 ಪಾಟೀಲ ಶಂಕರಗೌಡ ತಂದೆ: ಶಿವನಗೌಡ | 28/4 | 0-23 | **ಪೂರ್ವಕ್ಕೆ :** ಸ.ನಂ.19<br>**ಪಶ್ಚಿಮಕ್ಕೆ :** ಸ.ನಂ. 28/3<br>**ಉತ್ತರಕ್ಕೆ :** ಸ.ನಂ.20<br>**ದಕ್ಷಿಣಕ್ಕೆ :** ಸ.ನಂ. 28/2 |
| | ಪಾಟೀಲ ಬಸವನಗೌಡ ತಂದೆ: ಶಿವನಗೌಡ | 28/1 | 0-06 | **ಪೂರ್ವಕ್ಕೆ :** ಸ.ನಂ.19<br>**ಪಶ್ಚಿಮಕ್ಕೆ :** ಸ.ನಂ. 30<br>**ಉತ್ತರಕ್ಕೆ :** ಸ.ನಂ.28/1ರ ಉಳಿಕೆ<br>**ದಕ್ಷಿಣಕ್ಕೆ :** ಸ.ನಂ.20 |
| | ಪಾಟೀಲ ನಿಂಗನಗೌಡ ತಂದೆ: ಶಿವನಗೌಡ | 29/2 | 0-02 | **ಪೂರ್ವಕ್ಕೆ :** ಸ.ನಂ.28<br>**ಪಶ್ಚಿಮಕ್ಕೆ :** ಸ.ನಂ.29/2 ರ ಪ್ರದೇಶ<br>**ಉತ್ತರಕ್ಕೆ :** ಸ.ನಂ.26<br>**ದಕ್ಷಿಣಕ್ಕೆ :** ಸ.ನಂ.29/2 ರ ಪ್ರದೇಶ |

| 1 | 2 | 3 | 4 | 5 |
|---|---|---|---|---|
| ಜನ್ನತ್ ನಗರ ಕೊಳಚಿ ಪ್ರದೇಶ | ಪಾಟೀಲ ನಿಂಗನಗೌಡ ತಂದೆ: ಶಿವನಗೌಡ | 29/3 ಬಿ.ಪಿ.1 | 0-26 | **ಪೂರ್ವಕ್ಕೆ :** ಸ.ನಂ.28<br>**ಪಶ್ಚಿಮಕ್ಕೆ :** ಸ.ನಂ.29/3 ಅ<br>**ಉತ್ತರಕ್ಕೆ :** ಸ.ನಂ. 29/2<br>**ದಕ್ಷಿಣಕ್ಕೆ :** ಸ.ನಂ.29/1 |
| | | **ಒಟ್ಟು** | **7-09** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಂಜುಂಡಪ್ಪ**
ಪಿ. ಆರ್. 906 ಪೀಠಾಧಿಕಾರಿ-4, ವಸತಿ ಇಲಾಖೆ.

## ಅಧಿಸೂಚನೆ

**ನಂ: ವಇ 92 ಕೊಮಂಇ 2000 ಬೆಂಗಳೂರು, ದಿನಾಂಕ: 18ನೇ ಜುಲೈ 2003**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಮಂಡ್ಯ ಜಿಲ್ಲೆಯ ಮದ್ದೂರು ಪಟ್ಟಣದ ಗರೀಬಿಹಟಾವೋ ಕೊಳಚಿ ಪ್ರದೇಶವನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಯುಡಿ 150 ಎಂ.ಸಿ.ಎಸ್.80 ದಿನಾಂಕ: 1.5.1981 ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಅಧಿನಿಯಮ 1973 (33ನೇ ಕರ್ನಾಟಕ ಕಾಯ್ದೆ 1974) ರ ಕಲಂ 3 ಉಪ ಕಲಂ (1) ರನ್ವಯ ಕೊಳಚಿ ಪ್ರದೇಶವೆಂದು ಘೋಷಿಸಿದೆ.

ಸದರಿ ಕೊಳಚೆ ಪ್ರದೇಶವನ್ನು ಅಭಿವೃದ್ದಿಗೊಳಿಸಿ ಅಲ್ಲಿ ವಾಸಿಸುವ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಉದ್ದೇಶಿಸಿದ್ದು ಹಾಗೂ ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 17 ರಂತೆ ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವಾಗಿದೆ. ಆದುದರಿಂದ ಸಂಬಂಧಿಸಿದವರಿಗೆ/ ಸಾರ್ವಜನಿಕರಿಗೆ ಸೂಚನೆಯನ್ನು ನೀಡಿ ಸದರಿ ಪ್ರದೇಶದ ಬಗ್ಗೆ ಆಸಕ್ತಿಯುಳ್ಳವರು ಭೂ-ಸ್ವಾಧೀನ ಮಾಡಬಾರದೆಂಬುದಕ್ಕೆ ಕಾರಣ ಆಕ್ಷೇಪಣೆ ಸಲಹೆ ಮತ್ತು ಮನವಿಗಳಿದ್ದಲ್ಲಿ ಈ ಅಧಿಸೂಚನೆ ಪ್ರಕರಣವಾದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಸತಿ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಮೂರನೇ ಮಹಡಿ, ಬಹುಮಹಡಿ ಕಟ್ಟಡ, ಡಾ: ಬಿ. ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು -560 001, ಇವರಿಗೆ ಸಲ್ಲಿಸುವುದು.

**ಷೆಡ್ಯೂಲ್**

| ಕೊಳಚೆ ಪ್ರದೇಶದ ಹೆಸರು ಮತ್ತು ಇರುವ ಸ್ಥಳ | | ಭೂ ಮಾಲೀಕರ ಹೆಸರು | ಸರ್ವೆನಂ. | ವಿಸ್ತೀರ್ಣ ಎ-ಗುಂ | ಚಕ್ಕುಬಂದಿ |
|---|---|---|---|---|---|
| ಮದ್ದೂರು ಪಟ್ಟಣದ ಗರೀಬಿ ಹಟಾವೋ ಕೊಳಚೆ ಪ್ರದೇಶ | 1 | ಹೆಚ್. ಫಿಲಿಫ್ ಬಿನ್ ಮಲ್ಲಮ್ | 706/1ಎ | 0-04 | **ಪೂರ್ವ:** ಸ.ನಂ.706/4 ಮತ್ತು 707/1ಎ ಖಾಲಿ ಭೂಮಿ |
| | 2 | ಉದ್ರಪ್‌ಪುಟ್ಟೇಗೌಡ ಬಿನ್ ಮಾರಂಕೇಗೌಡ | 706/1ಬಿ | 0-12 | |
| | 3 | ಶ್ರೀಮತಿ ಶಿವಲಕ್ಷ್ಮಮ್ಮ | 706/1ಸಿ | 0-04 | **ಪಶ್ಚಿಮಕ್ಕೆ:** ಸ.ನಂ. 706/3 ಮತ್ತು ಸ.ನಂ.707/1 ಬಿ. |
| | 4 | ಸಿದ್ದಯ್ಯ ಅಲಿಯಾಸ್ ತಿಮ್ಮಯ್ಯ ಬಿನ್ ಸಿದ್ದೇಗೌಡ | 706/1ಡಿ | 0-05 | |
| | 5 | ಮಾಯಪ್ಪ ಬಿನ್ ಮರೀಗೌಡ | 706/1ಇ | 0-10 | |
| | 6 | ದೊಡ್ಡಲಿಂಗಯ್ಯ ಬಿನ್ ಲಿಂಗೇಗೌಡ | 706/1ಎಫ್ | 0-10 | **ಉತ್ತರಕ್ಕೆ:** - ಹಳೆ ಹರಿಜನ ಕಾಲೋನಿ |
| | 7 | ಚನ್ನವೀರಗೌಡ ಬಿನ್ ಕುಳ್ಳೇಗೌಡ | 706/1ಜಿ | 0-05 | |
| | 8 | ಸಿಂಗ್ರೇಗೌಡ ಬಿನ್ ಚೆಲುವೆಗೌಡ | 706/1 ಹೆಚ್ | 0-03 | |
| | 9 | ಕುಳ್ಳಗೌಡ ಬಿನ್ ಹುಚ್ಚನೀರೇಗೌಡ | 706/1ಐ | 0-05 | |
| | 10 | ಕಳರೇಗೌಡ ಬಿನ್ ಚಿಕ್ಕಹುಚ್ಚೇಗೌಡ | 706/1ಜೆ | 0-05 | **ದಕ್ಷಿಣಕ್ಕೆ:** ಸರ್ವೆ ನಂ. 707/1 ಎ ಉಳಿದ ಭೂಮಿ |
| | 11 | ಕೆಂಪಮ್ಮ ಅಲಿಯಾಸ್ ತಾಯಮ್ಮ | 707/1ಎ | 0-04 | |
| | 12 | ಎಂ. ಬಿ. ಚನ್ನಯ್ಯ ಎಂ. ಮಾದಪ್ಪ ಹೆಚ್. ಎಲ್. ಪುಟ್ಟಯ್ಯ | 708/1 | 3-04 | **ಪೂರ್ವಕ್ಕೆ:** ಸ.ನಂ. 708/1<br>**ಪಶ್ಚಿಮಕ್ಕೆ:** ಸ.ನಂ. 708/2<br>**ಉತ್ತರಕ್ಕೆ:** ಸ.ನಂ. 707/1ಎರ ಉಳಿದ ಭೂಮಿ<br>**ದಕ್ಷಿಣಕ್ಕೆ:** ಸ.ನಂ. 709 |
| | | **ಒಟ್ಟು** | | **4-31** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಂಜುಂಡಪ್ಪ**
ಪಿ. ಆರ್. 907 ಪೀಠಾಧಿಕಾರಿ-4,
ವಸತಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನ.ಅ.ಇ. 12 ಯುಡಬ್ಲ್ಯೂಎಸ್ 2003 ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2003**

ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯ ಕಾಯ್ದೆ 1973 (1974ರ ಕರ್ನಾಟಕ ಕಾಯ್ದೆ ಸಂಖ್ಯೆ:25)ರ ಸೆಕ್ಷನ್ 21 ಮತ್ತು 22 (1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮುಧೋಳ್ ಪಟ್ಟಣಕ್ಕೆ ರೂ. 1299.36 ಲಕ್ಷಗಳ (ರೂಪಾಯಿ ಒಂದು ಸಾವಿರದ ಎರಡು ನೂರ ತೊಂಬತ್ತೊಂಬತ್ತು ಲಕ್ಷಗಳು ಮತ್ತು ಮೂವತ್ತಾರು ಸಾವಿರಗಳು ಮಾತ್ರ) ಪರಿಷ್ಕೃತ ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಮಾಡುವ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟಂತೆ ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

1. ಆರ್ಥಿಕ ಮಾದರಿಯು ಹಣಕಾಸು ಸಂಸ್ಥೆಯಿಂದ ಸಾಲ ಶೇಕಡ 50ರಷ್ಟು ಸರ್ಕಾರದ ಅನುದಾನ ಶೇಕಡ 50 ರಷ್ಟು ಇರಬೇಕು.
2. ನಿಗಮವು ಸದರಿ ಸ್ಕೀಮನ್ನು ಮಂಡಳಿಗೆ ಒದಗಿಸಿದ ಆಯವ್ಯಯದಲ್ಲಿ ಜಾರಿಗೊಳಿಸಬೇಕು.
3. ನದಿಯಿಂದ ತೆಗೆದುಕೊಳ್ಳುವ ನೀರನ್ನು ಕುಡಿಯುವ ನೀರಿಗಾಗಿ ಮಾತ್ರ ಉಪಯೋಗಿಸತಕ್ಕದ್ದು. ಯಾವುದೇ ಕಾರಣಕ್ಕೂ ಈ ನೀರನ್ನು ಬೇರೆ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.
4. ಯಾವುದೇ ಕಾರಣಕ್ಕೂ ನದಿಯಲ್ಲಿ ನಿಗದಿತ ಪ್ರಮಾಣದಲ್ಲಿ ನೀರು ಇಲ್ಲದಿದ್ದಲ್ಲಿ ಜಲ ಸಂಪನ್ಮೂಲ ಇಲಾಖೆಯಿಂದ ಯಾವುದೇ ಪರಿಹಾರವನ್ನು ನೀಡಲಾಗುವುದಿಲ್ಲ.
5. ನದಿಯಿಂದ ನೀರನೆತ್ತಲು ಅಗತ್ಯವಿರುವ ಎಲ್ಲಾ ವ್ಯವಸ್ಥೆಗಳ ಮತ್ತು ವಿನ್ಯಾಸಗಳಿಗೆ ಜಲ ಸಂಪನ್ಮೂಲ ಇಲಾಖೆಯ ಸಕ್ಷಮ ಪ್ರಾಧಿಕಾರದವರಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು. ಈ ವ್ಯವಸ್ಥೆಯಿಂದ ಕೆಳಭಾಗದ ನದಿಯಲ್ಲಿನ ನೀರಿನ ಹರಿವಿಗೆ ಯಾವುದೇ ರೀತಿಯ ತೊಂದರೆ ಆಗದಂತೆ ನೋಡಿಕೊಳ್ಳತಕ್ಕದ್ದು.
6. ಸದರಿ ಕುಡಿಯುವ ನೀರಿನ ಯೋಜನೆಯ ನಿರ್ಮಾಣದ ಸಂದರ್ಭದಲ್ಲಿ ಜಲ ಸಂಪನ್ಮೂಲ ಇಲಾಖೆಯ ಯಾವುದೇ ಆಸ್ತಿಗೆ ಹಾನಿಯಾಗದಂತೆ ಕ್ರಮ ಜರುಗಿಸತಕ್ಕದ್ದು.
7. ಯೋಜನೆಯ ನಿರ್ಮಾಣದ ಸಂದರ್ಭದಲ್ಲಿ ಜಲ ಸಂಪನ್ಮೂಲ ಇಲಾಖೆಯ ಅಧಿಕಾರಿಗಳಿಗೆ ಸೂಚನೆ ಬಂದಾಗ ಪರಿವೀಕ್ಷಣೆಗೆ ಅವಕಾಶವನ್ನು ನೀಡತಕ್ಕದ್ದು.
8. ಅಗತ್ಯ ಕರಾರನ್ನು ಜಲ ಸಂಪನ್ಮೂಲ ಇಲಾಖೆಯ ಸಂಬಂಧಪಟ್ಟ ಕಾರ್ಯಪಾಲಕ ಇಂಜಿನೀಯರ್‌ರೊಂದಿಗೆ ಮಾಡಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಪಿ. ಆರ್. 908 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 47 ಎಲ್‌ಜಿಎಂ 2003 ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2003**

ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಸಬ್ ಸೆಕ್ಷನ್ (1) ಸೆಕ್ಷನ್ 94-ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮೈಸೂರು ಜಿಲ್ಲೆ, "ನಂಜನಗೂಡು" ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

2. ದಿನಾಂಕ: 26.2.2001 ರಂದು ಹೊರಡಿಸಲಾಗಿರುವ ಸಂಖ್ಯೆ: ಆರ್‌ಡಿ 93 ಎಲ್‌ಜಿಎಂ 2000, ರ ಅಧಿಸೂಚನೆಯನ್ನು ರದ್ದುಗೊಳಿಸಲಾಗಿದೆ.

| ಕ್ರ.ಸಂ. | ತಾಲ್ಲೂಕು | ಸದಸ್ಯರು | | |
|---|---|---|---|---|
| 1. | ನಂಜನಗೂಡು. | 1. | ಶ್ರೀ ಶ್ರೀನಿವಾಸಮೂರ್ತಿ ಬಿನ್ ಚೌಡಯ್ಯ ವೀರದೇವನಪುರ, ನಂಜನಗೂಡು ತಾಲ್ಲೂಕು. | ಅಧ್ಯಕ್ಷರು. |
| | | 2. | ಶ್ರೀಮತಿ ಜಯಮ್ಮ, ಕೋಂ ಹೆಚ್. ಪಿ. ಸಿದ್ದಪ್ಪ, ಸೂರಳ್ಳಿ, ನಂಜನಗೂಡು ತಾಲ್ಲೂಕು. | ಸದಸ್ಯರು |
| | | 3. | ಶ್ರೀ ಶಿವರುದ್ರಪ್ಪ ಬಿನ್ ಮಲ್ಲಯ್ಯ ಹೊಸವೀಡು ಉಂಡಿ, ನಂಜನಗೂಡು ತಾಲ್ಲೂಕು. | ಸದಸ್ಯರು |
| | | 4. | ಶ್ರೀ ಎಸ್. ಎಂ. ಲಿಂಗಪ್ಪ ಬಿನ್ ಮಲ್ಲಪ್ಪ, ಸಿಂಧುವಳ್ಳಿ, ನಂಜನಗೂಡು ತಾಲ್ಲೂಕು. | ಸದಸ್ಯರು |
| | | 5. | ತಹಶೀಲ್ದಾರ್, ನಂಜನಗೂಡು ತಾಲ್ಲೂಕು. | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಪಿ. ನರಸಿಂಹಯ್ಯ**

ಪಿ. ಆರ್. 909 ಪೀಠಾಧಿಕಾರಿ, ಕಂದಾಯ ಇಲಾಖೆ. (ಭೂ.ಮಂಜೂರಾತಿ-2).

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನ.ಅ.ಇ 36 ಎಂ.ಎಲ್.ಆರ್. 2002 (B-57) ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2003**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕುಮಟಾ ಪುರಸಭೆಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

1. ಶ್ರೀ ಸುಬ್ರಾಯ ಬಲಿಯಾ ಹರಿಂಕತ್ರ, ಶಶಿ ಹಿತ್ತಲೆ, ಕುಮಟಾ
2. ಶ್ರೀ ಮುದುದಾಸ್ ಮಹಾಲೆ, ನೆಲ್ಲಿಕೇರಿ, ಕುಮಟಾ
3. ಶ್ರೀಮತಿ ಶಶಿಕಲಾ ಪ್ರಭಾಕರ್ ಹರ್ಮಾಲಕರ್ ಕುಮಟಾ
4. ಶ್ರೀ ರಾಮಚಂದ್ರ ಉಪೇಂದ್ರ ಬಂಡಾರಿ, ಉರ್ದು ಸ್ಕೂಲ್ ರೋಡ್, ಕುಮಟಾ
5. ಶ್ರೀ ಎ. ಬಿ. ಮುಲ್ಲಾ ವನಳ್ಳಿ ಕುಮಟಾ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿ. ಆರ್. 910

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ನ.ಅ.ಇ 36 ಎಂ.ಎಲ್.ಆರ್. 2002 (C-77) ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2003**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತರೀಕೆರೆ ಪಟ್ಟಣ ಪಂಚಾಯಿತಿಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

1. ಶ್ರೀ ಮಹ್ಮದ್ ಯೂಸೂಫ್ ಬಿನ್ ಟಿ.ಎ. ವಾಜೀದ್ ಸಾಬ್, ಸರ್ದಾರ ಸಾಮಿಲ್, ಕೋಡಿಕ್ಯಾಂಪ್, ತರೀಕೆರೆ.
2. ಶ್ರೀ ತಿಮ್ಮಯ್ಯ ತಂದೆ ಗೋವಿಂದಪ್ಪ, ಎ. ಕೆ. ಕಾಲೋನಿ, ತುದಿ ಪೇಟೆ ಹಿಂಭಾಗ, ತರೀಕೆರೆ
3. ಶ್ರೀ ಆರ್. ಬಸವರಾಜು ತಂದೆ ರಾಮಣ್ಣ ಪಂಡಿತ್ ದೀನದಯಾಳು ರಸ್ತೆ, ತರೀಕೆರೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿ. ಆರ್. 911

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ನ.ಅ.ಇ 36 ಎಂ.ಎಲ್.ಆರ್. 2002 (B-73) ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2003**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಧುಗಿರಿ ಪುರಸಭೆಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

1. ಶ್ರೀ ಮೊಹಮದ್ ಜಾಫರ್ ಸಾದಿಕ್ ಬಿನ್ ಶ್ರೀ ಅನ್ವರ್ ಸಾಬ್, 1ನೇ ಬ್ಲಾಕ್ ಡಿ. ಬಿ. ರೋಡ್ ಮಧುಗಿರಿ
2. ಶ್ರೀ ನಾಗಪ್ಪ ಬಿನ್ ಶ್ರೀ ತುರಮಂಜಪ್ಪ, 1ನೇ ಬ್ಲಾಕ್ ಕವಾಡಿಗರ ಬೀದಿ, ಮಧುಗಿರಿ
3. ಶ್ರೀ ಕೃಷ್ಣಪ್ಪ (ಟಿ.ಸಿ.ಎಚ್.ಕಾಲೇಜು) ಬಿನ್ ಶ್ರೀ ಪ. ನರಸಿಂಹಯ್ಯ, ಬಿ.ವಿ.ಬಿ. ಬಡಾವಣೆ, ಮಧುಗಿರಿ
4. ಶ್ರೀ ಎಸ್. ಎನ್. ಸತ್ಯನಾರಾಯಣ ಬಿನ್ ಎಸ್. ನಾರಾಯಣಪ್ಪ, ಹಣ್ಣಿನ ಅಂಗಡಿ ಜಿಲ್ಲಾ ಪಂಚಾಯತ್ ಕಾಂಪ್ಲೆಕ್ಸ್, ಮಧುಗಿರಿ
5. ಶ್ರೀ ಸಿ. ಎಸ್. ಗುರುರಾಜ್, ಬಿನ್ ಸೂರ್ಯನಾರಾಯಣರಾವ್, ಪ್ರಜಾವಾಣಿ ಏಜೆಂಟ್, ಮಲ್ಲೇಶ್ವರ ಬೀದಿ, ಮಧುಗಿರಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿ. ಆರ್. 912

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.